# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **436** |
| ಉತ್ತರಿಸಬೇಕಾದ ದಿನಾಂಕ | : | 15.09.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ದೇವರಾಜ್ ಅರಸು ವಸತಿ ಯೋಜನೆಯಡಿ ವಿಶೇಷ ವರ್ಗದ ವಸತಿಹೀನ ಅಂಗವಿಕಲರು, ವಿಧವೆಯರಿಗೆ ವಸತಿ ನೀಡುವ ಯೋಜನೆಯಲ್ಲಿ ಅನುದಾನ ಸಮರ್ಪಕವಾಗಿ ಬಿಡುಗಡೆಯಾಗದೆ ಯೋಜನೆಯ ಅನುಷ್ಠಾನ ಕುಂಠಿತವಾಗಿರುವ ವಿಚಾರ ಮತ್ತು ಫಲಾನುಭವಿಗಳು ಅನುದಾನ ಬಿಡುಗಡೆಯಾಗಿ ಸರ್ಕಾರಿ ಕಛೇರಿಗಳಿಗೆ ಅಲೆದಾಡುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ ; | ದೇವರಾಜ್ ಅರಸು ವಸತಿ ಯೋಜನೆಯನ್ನು ಒಳಗೊಂಡಂತೆ ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳಿಗೆ ಇಂದಿರಾ ಮನೆ ಆ್ಯಪ್ ನ ಮುಖಾಂತರ ಜಿ.ಪಿ.ಎಸ್ ಮಾಡಲಾದ ಮನೆಗಳ ಭೌತಿಕ ಪ್ರಗತಿಗನುಗುಣವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು, ಆದರೆ, ಪ್ರಗತಿಯಲ್ಲಿರುವ ಮನೆಗಳಲ್ಲಿ ಕೆಲವು ಅನರ್ಹ ಫಲಾನುಭವಿಗಳ ಆಯ್ಕೆ ಕಂಡು ಬಂದಿರುವುದರಿಂದ ಅನುದಾನ ದುರ್ಬಳಕೆಯನ್ನು ತಡೆ ಹಿಡಿಯುವ ಉದ್ದೇಶದಿಂದ ಸರ್ಕಾರದ ಆದೇಶ ಸಂಖ್ಯೆ:ವಇ 154 ಹೆಚ್ಎಎಂ 2019, ದಿನಾಂಕ:16.11.2019 ರ ರೀತ್ಯಾ ಪ್ರಗತಿಯಲ್ಲಿರುವ ಮನೆಗಳನ್ನು ಇಂದಿರಾ ಮನೆ ಮೊಬೈಲ್ ಆಪ್ ಮೂಲಕ ಜಿ.ಪಿ.ಎಸ್ ಗೆ ಅಳವಡಿಸಿ, ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ Geo ಆಧಾರಿತ ವಿಜಿಲ್ ಆಪ್ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರು ಪರಿಶೀಲಿಸಿ, ದೃಢೀಕರಿಸಿದ ನಂತರ ಸದರಿ ಫಲಾನುಭವಿಗಳ ಆಧಾರ್ ಜೋಡಣೆಯಾದ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮುಖಾಂತರ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು.<br><br>ಮುಂದುವರೆದಂತೆ ವಿವಿಧ ವಸತಿ ಯೋಜನೆಗಳಡಿ ಪ್ರಗತಿಯಲ್ಲಿರುವ ಮನೆಗಳ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವಾಗ ಇಂದಿರಾ ಆಪ್ ಮತ್ತು ವಿಜಿಲ್ ಆಪ್ ಎಂಬ ಎರಡು ಪರಿಶೀಲನಾ ವಿಧಾನಗಳ ಮೂಲಕ ಅನುದಾನ ಬಿಡುಗಡೆ ಆಗುತ್ತಿದ್ದು, ಇದರಿಂದ ಆಗುವ ವಿಳಂಬವನ್ನು ತಪ್ಪಿಸಲು ಮೇಲ್ಕಂಡ ಇಂದಿರಾ ಆಪ್ ಮತ್ತು ವಿಜಿಲ್ ಆಪ್ ಅನ್ನು ಒಗ್ಗೂಡಿಸಿ, ಇಂದಿರಾ ವಿಜಿಲ್ ಆಪ್ ಎಂಬ ನೂತನ ತಂತ್ರಾಂಶವನ್ನು ಅಳವಡಿಸಲಾಗಿದ್ದು, ಫಲಾನುಭವಿಗಳಿಗೆ ಶೀಘ್ರವಾಗಿ ಅನುದಾನ ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಲಾಗಿದೆ. |

| | | |
|---|---|---|
| (ಆ) | ಹಾಗಿದ್ದಲ್ಲಿ, ಬೆಳಗಾವಿ ಜಿಲ್ಲೆಗೆ 2018-19, 2019-20 ಮತ್ತು 2020-21 ನೇ ಸಾಲಿನಲ್ಲಿ ಎಷ್ಟು ಅರ್ಹ ಫಲಾನುಭವಿಗಳಿಗೆ ವಸತಿ ನೀಡುವ ಗುರಿ ಹೊಂದಲಾಗಿತ್ತು ; ಎಷ್ಟು ಅನುದಾನ ಒದಗಿಸಲಾಗಿತ್ತು ; ಈಗಾಗಲೇ ಎಷ್ಟು ಅನುದಾನ ಬಿಡುಗಡೆಯಾಗಿದೆ ; (ವಿವರ ನೀಡುವುದು) | ಬೆಳಗಾವಿ ಜಿಲ್ಲೆಗೆ 2018-2019 ಮತ್ತು 2019-2020 ನೇ ಸಾಲಿನಲ್ಲಿ ಯಾವುದೇ ಮನೆಗಳ ಗುರಿಯನ್ನು ಹಂಚಿಕೆ ಮಾಡಲಾಗಿರುವುದಿಲ್ಲ. 2020-2021 ನೇ ಸಾಲಿನಲ್ಲಿ ಸರ್ಕಾರವು ಆದೇಶ ಸಂಖ್ಯೆ :ವಇ 56 ಹೆಚ್ ಎಹೆಚ್ 2020, ದಿನಾಂಕ :27.01.2021 ರಲ್ಲಿ 1879 ಮನೆಗಳ ಗುರಿಯನ್ನು ವಿವಿಧ ವಿಧಾನ ಸಭಾ ಕ್ಷೇತ್ರಗಳಿಗೆ ಮಂಜೂರು ಮಾಡಲಾಗಿದ್ದು, ಫಲಾನುಭವಿಗಳ ಅನುಮೋದನೆ ಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ. |
| (ಇ) | ಬೆಳಗಾವಿಗೆ ಜಿಲ್ಲೆಗೆ 2018-19, 2019-20 ಮತ್ತು 2020-21 ನೇ ಸಾಲಿನಲ್ಲಿ ನೀಡಿದ್ದ ಒಟ್ಟು ಗುರಿಗಳಲ್ಲಿ ಈವರೆಗೆ ಆಗಿರುವ ಪ್ರಗತಿಯೆಷ್ಟು ; ಎಷ್ಟು ಮಂದಿ ಫಲಾನುಭವಿಗಳು ಸಂಪೂರ್ಣ ಮನೆ ಕಟ್ಟಿಕೊಂಡಿದ್ದಾರೆ ; ಬಾಕಿ ಉಳಿದ ಮನೆಗಳು ಯಾವ ಹಂತದಲ್ಲಿವೆ ; ಬಾಕಿ ಉಳಿಯುವ ಕಾರಣಗಳೇನು ; (ವಿವರ ನೀಡುವುದು) | |
| (ಈ) | ಯಾವ ಕಾಲಮಿತಿಯಲ್ಲಿ ಸದರಿ ಯೋಜನೆಯು ಸಂಪೂರ್ಣ ಅನುಷ್ಠಾನಗೊಳಿಸಲಾಗುವುದು ? | ಫಲಾನುಭವಿಗಳ ಅನುಮೋದನೆ ಪ್ರಕ್ರಿಯೆ ಪ್ರಗತಿಯಲ್ಲಿದ್ದು, ಅನುಮೋದನೆಗೊಂಡ ಫಲಾನುಭವಿಗಳಿಗೆ ಕಾಮಗಾರಿ ಆದೇಶ ನೀಡಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗುವುದು. |

ಸಂಖ್ಯೆ :ವಇ 297 ಹೆಚ್ಎಎಂ 2021

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು